# ಶ್ರೀ ಹರಿಕಥಾಮೃತಸಾರ

ನಾಗರಾಜು ಹಾವೇರಿ, ಪಲ್ಲವೀಪ್ರಿಯ – 99010 52578

## 28. ವಿಘ್ನೇಶ ಸಂಧಿ

ಹರಿಕಥಾಮೃತಸಾರಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲವಿ ॥

ಹರಿಕಥಾಮೃತಸಾರವನ್ನು ಗುರುಗಳ ಕರುಣದಿಂದ ಯಥಾಶಕ್ತಿ ಹೇಳುವೆನು. ಪರಮ ಭಗವದ್ಭಕ್ತರು ಇದನ್ನು ಭಕ್ತಿಯಿಂದ ಆಲಿಸಬೇಕು.

ಶ್ರೀಶನಂಘ್ರಿ ಸರೋಜ ಭೃಂಗ ಮಹೇಶ ಸಂಭವ ಮನ್ಮನದೊಳೂ ಪ್ರ–
ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ
ನೀ ಸಲಹು ಸಜ್ಜನರ ವೇದವ್ಯಾಸ ಕರುಣಾಪಾತ್ರ ಮಹದಾ–
ಕಾಶಪತಿ ಕರುಣಾಳು ಕೈಪಿಡಿದೆಮ್ಮನುದ್ಧರಿಸು ॥ ೧ ॥

ಲಕ್ಷ್ಮೀಪತಿಯಾದ ಶ್ರೀಹರಿಯ ಪಾದಕಮಲಗಳಲ್ಲಿ ಭ್ರಮರದಂತೆ ಆಸಕ್ತನಾದವನೇ, ಮಹೇಶನಾದ ಶಿವನ ಪುತ್ರನೇ ನನ್ನ ಮನದಲ್ಲಿ ನೀನು ಅನುದಿನ ಪ್ರಕಾಶಿಸು. ನಿನ್ನನ್ನು ಪ್ರೇಮಾತಿಶಯದಿಂದ ಪ್ರಾರ್ಥಿಸುವೆನು. ನೀನು

ಸಜ್ಜನರನ್ನು ಪಾಲಿಸುವನು. ಶ್ರೀವೇದವ್ಯಾಸದೇವರ ಕರುಣೆಗೆ ಪಾತ್ರನಾದವನು. ಭೂತಾಕಾಶಕ್ಕೆ ಅಭಿಮಾನಿದೇವತೆಯಾದ ಕರುಣಾಳುವೇ ನಮ್ಮನ್ನು ಕೈಹಿಡಿದು ಉದ್ಧರಿಸು.

ಏಕದಂತ ಇಭೇಂದ್ರ ಮುಖ ಚಾಮೀಕರಕೃತ ಸುಭೂಷನಾಂಗ ಕೃ-
ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆ ಇನಿತೆಂದು
ನೋಕನೀಯನ ನುತಿಸತಿಪ್ಪ ವಿವೇಕಿಗಳ ಸಹವಾಸ ಸುಖಗಳ
ನೀ ಕರುಣಿಸುವದೆಮಗೆ ಸಂತತ ಪರಮ ಕರುಣದಲಿ ॥ ೨ ॥

ಏಕದಂತನೇ, ಗಜರಾಜನಂತಹಾ ಮುಖವುಳ್ಳವನೇ, ಚಿನ್ನದಿಂದ ಮಾಡಲ್ಪಟ್ಟ ಆಭರಣಗಳಿಂದ ಭೂಷಿತನಾಗಿ ಕಂಗೋಳಿಸುವ ದೇಹವುಳ್ಳವನೇ ಕೃಪಾಕಟಾಕ್ಷದಿಂದ ನೋಡು ಎಂದು ನಾನು ವಿಜ್ಞಾಪಿಸುವೆನು. ಎಂದೂ ನಿಕೃಷ್ಟನೆನಿಸದ ಶ್ರೀಹರಿಯ ಸ್ತೋತ್ರ ಮಾಡುತ್ತಿರುವ ಜ್ಞಾನಿಗಳ ಸಹವಾಸ ಸುಖಗಳನ್ನು ನೀನು ಯಾವಾಗಲೂ ಪರಮ ಕರುಣೆಯಿಂದ ನಮಗೆ ಕರುಣಿಸಬೇಕು.

ವಿಘ್ನರಾಜನೇ ದುರ್ವಿಷಯದೊಳು ಮಗ್ನವಾಗಿಹ ಮನವ ಮಹದೋ-
ಷಘ್ನನಂಘ್ರಿ ಸರೋಜಯುಗಳದಿ ಭಕ್ತಿಪೂರ್ವಕದಿ
ಲಗ್ನವಾಗಲಿ ನಿತ್ಯ ನರಕ ಭಯಾಗ್ನಗಳಿಗಾನಂಜೆ ಗುರುವರ
ಭಗ್ನಗೈಸೆನ್ನವಗುಣಗಣಗಳನು ಪ್ರತಿದಿವಸದಲ್ಲಿ ॥ ೩ ॥

ವಿಘ್ನರಾಜನೇ ಕೆಟ್ಟ ವಿಷಯಗಳಲ್ಲಿ ಆಸಕ್ತವಾಗಿರುವ ಮನಸ್ಸನ್ನು, ಮಹಾಪಾತಕಗಳನ್ನು ಪರಿಹರಿಸುವ ಶ್ರೀಹರಿಯ ಎರಡು

ಪಾದಕಮಲಗಳಲ್ಲಿ ಆಸಕ್ತವಾಗಿಸು. ನಿತ್ಯ ನಾನು ನರಕಭಯವೆಂದ ಅಗ್ನಿಗಳಿಗೆ ಭಯಪಡೆನು. ಗುರುವರ್ಯನೇ ನನ್ನ ದೋಷಗಳನ್ನು ಪ್ರತಿದಿವಸದಲ್ಲೂ ಪರಿಹರಿಸು.

ಧನಪ ವಿಷ್ವಕ್ಸೇನ ವೈದ್ಯಾಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ-
ನನುಜ ಶೇಷಶತಸ್ಥ ದೇವೋತ್ತಮ ವಿಯದ್ಗಂಗಾ
ವಿನುತ ವಿಶ್ವೋಪಾಸಕನೇ ಸನ್ಮನದಿ ವಿಜ್ಞಾಪಿಸುವೆ ಲಕ್ಷ್ಮೀ-
ವನಿತೆಯರಸನ ಭಕ್ತಿಜ್ಞಾನವ ಕೊಟ್ಟು ಸಲಹುದು ॥ ೪ ॥

ಕುಭೇರ, ವಿಷ್ವಕ್ಸೇನ, ಅಶ್ವನೀದೇವತೆಗಳಿಗೆ ಸಮಾನವೆನ್ನಿಸುವವನೇ, ಷಣ್ಮುಖನನುಜನೇ, ಶೇಷಶತಸ್ಥದೇವತೆಗಳಲ್ಲಿ ಉತ್ತಮನಾದವನೇ, ಆಕಾಶಗಂಗೆಯಿಂದ ವಿಶೇಷವಾಗಿ ಸ್ತುತನಾದವನೇ, ವಿಶ್ವನಾಮಕ ಶ್ರೀಹರಿಯ ರೂಪವನ್ನು ಉಪಾಸನೆ ಮಾಡುವವನೇ, ಉತ್ತಮ ಮನಸ್ಸಿನಿಂದ ಪ್ರಾರ್ಥಿಸುವೆನು. ಲಕ್ಷ್ಮೀಪತಿಯಾದ ಶ್ರೀಹರಿಯಲ್ಲಿ ಭಕ್ತಿಜ್ಞಾನಗಳನ್ನು ಕೊಟ್ಟು ಪಾಲಿಸುವುದು.

ಚಾರುದೇಷ್ಣಾಹ್ವನೆನಿಸಿ ಅವತಾರ ಮಾಡಿದೆ ರುಗ್ಮಿಣೀಯಲಿ
ಗೌರಿಯರಸನ ವರದಿ ಉದ್ಧಟರಾದ ರಾಕ್ಷಸರ
ಶೌರಿಯಾಜ್ಞದಿ ಸಂಹರಿಸಿ ಭೂಭಾರ ವಿಳುಹಿದ ತ್ವತ್ಪಾ-
ದಾರವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯ ॥ ೫ ॥

ಚಾರುದೇಷ್ಣ ಎಂಬ ಹೆಸರಿನಿಂದ ನೀನು ರುಕ್ಮಿಣೀಯಲ್ಲಿ ಅವತರಿಸಿ, ಗೌರೀಪತಿಯಾದ ಶಿವನ ವರದಿಂದ ಉನ್ಮತ್ತರಾದ ರಾಕ್ಷಸರನ್ನು ಶ್ರೀಕೃಷ್ಣನ

ಆಜ್ಞೆಯಿಂದ ಸಂಹರಿಸಿ ಭೂಭಾರವನ್ನು ಪರಿಹರಿಸಿದ ಕರುಣಾಳು ನೀನು. ನಿನ್ನ ಪಾದಕಮಲಕ್ಕೆ ನಮಸ್ಕರಿಸುವೆನು. ನಮಗೆ ಸನ್ಮತಿಯನ್ನು ಕರುಣಿಸಬೇಕು.

ಶೂರ್ಪಕರ್ಣದ್ವಯ ವಿಜಿತ ಕಂದರ್ಪಶರ ಉದಿತಾರ್ಕಸನ್ನಿಭ
ಸರ್ಪವರಕಟಿಸೂತ್ರ ವೈಕೃತಗಾತ್ರ ಸುಚರಿತ್ರ
ಸ್ವರ್ಪಿತಾಂಕುಶಪಾಶಕರ ಖಳದರ್ಪಭಂಜನ ಕರ್ಮಸಾಕ್ಷಿಗ
ತರ್ಪಕನು ನೀನಾಗಿ ತೃಪ್ತಿಯ ಪಡಿಸು ಸಜ್ಜನರ ॥ ೬ ॥

ಮೊರದಂತೆ ಎರಡು ಕಿವಿಗಳನ್ನು ಹೊಂದಿದವನೇ, ಮನ್ಮಥನ ಬಾಣಗಳನ್ನು ಜಯಿಸಿದವನೇ, ಉದಿಸುವ ಸೂರ್ಯನಂತೆ ರಕ್ತವರ್ಣ ಹೊಂದಿದವನೇ, ಶ್ರೇಷ್ಠ ಸರ್ಪವನ್ನು ಸೊಂಟಕ್ಕೆ ಬಿಗಿದಿರುವವನೆ, ಲಂಬೋದರನೇ, ಉತ್ತಮ ಚರಿತ್ರನೇ, ಕೈಯಲ್ಲಿ ಪಾಶ ಮತ್ತು ಅಂಕುಶಗಳನ್ನು ಧರಿಸಿರುವವನೇ, ದುಷ್ಟರ ಸೊಕ್ಕನ್ನು ಮುರಿದವನೇ, ಕರ್ಮಗಳಿಗೆ ಸಾಕ್ಷಿಯಾಗಿ ಇರುವವನೇ, ನೀನು ಸಂತೋಷಪಡಿಸುವವನಾಗಿ ಸಜ್ಜರನ್ನು ಸಂತೃಪ್ತಿಪಡಿದು.

ಖೇಶ ಪರಮ ಸುಭಕ್ತಿಪೂರ್ವಕ ವ್ಯಾಸಕೃತಗ್ರಂಥಗಳನರಿತು ಪ್ರ-
ಯಾಸವಿಲ್ಲದೇ ಬರೆದು ವಿಸ್ತರಿಸಿದೆಯೋ ಲೋಕದೊಳು
ಪಾಶಪಾಣಿಯೇ ಪ್ರಾರ್ಥಿಸುವೆನುಪದೇಶಿಸೆನಗದರರ್ಥಗಳ ಕರು
ಣಾಸಮುದ್ರ ಕೃಪಾಕಟಾಕ್ಷದಿ ನೋಡು ಪ್ರತಿದಿನದಿ ॥ ೭ ॥

ಭೂತಾಕಾಶದಿ ಅಭಿಮಾನಿದೇವತೆಯೇ, ಪರಮ ಸುಭಕ್ತಿಪೂರ್ವಕವಾಗಿ ಶ್ರೀವೇದವ್ಯಾಸದೇವರಿಂದ ರಚಿತವಾದ ಗ್ರಂಥಗಳನ್ನು ತಿಳಿದು,

ಪ್ರಯಾಸವಿಲ್ಲದೇ ಅವುಗಳನ್ನು ಬರೆದು ಕೋಲಕದಲ್ಲಿ ವಿಸ್ತರಿಸಿರುವೆ. ಪಾಶಪಾಣಿಯೇ ನಿನ್ನನ್ನು ಪ್ರಾರ್ಥಿಸುವೆ. ಕರುಣಾ ಸಮುದ್ರನಾದ ನೀನು ಕೃಪಾಕಟಾಕ್ಷದಿಂದ ನೋಡಿ ಪ್ರತಿದಿನದಲ್ಲಿ ನನಗೆ ಆ ಗ್ರಂಥಗಳ ಅರ್ಥವನ್ನು ಉಪದೇಶಿಸು.

ಶ್ರೀಶನತಿನಿರ್ಮಲಸುನಾಭೀದೇಶವಸ್ಥಿತ ರಕ್ತಗಂಧಾ
ಸುಶೋಭಿತಗಾತ್ರ ಲೋಕಪವಿತ್ರ ಸುರಮಿತ್ರ
ಮೂಷಕಾಸುರವಹನ ಪ್ರಾಣಾವೇಶಯುತ ಪ್ರಖ್ಯಾತ ಪ್ರಭು ಪೂ-
ರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ ॥ ೮ ॥

ಲಕ್ಷ್ಮೀಪತಿಯಾದ ಶ್ರೀಹರಿಯ ನಿರ್ಮಲ ನಾಭಿ ಪ್ರದೇಶವಾದ ಆಕಾಶದಲ್ಲಿ ನೆಲೆಸಿರುವವನೇ, ಕೆಂಪಾದ ಶ್ರೀಗಂಧದಿಂದ ಕಂಗೊಳಿಸುವ ದೇಹವುಳ್ಳವನೇ, ಲೋಕಪಾವನನೇ, ಸುರರಿಗೆ ಮಿತ್ರನೇ, ಇಲಿ ಎಂಬ ಶ್ರೇಷ್ಠವಾಹನವನ್ನು ಹೊಂದಿರುವವನೇ, ಪ್ರಾಣದೇವರ ಆವೇಶ ಉಳ್ಳವನೇ, ಪ್ರಖ್ಯಾತನೇ, ಪ್ರಭುವೇ, ನೀನು ಭಕ್ತರು ಬೇಡುವ ಇಷ್ಟಾರ್ಥಗಳನ್ನು ಪ್ರತಿದಿವಸದಲ್ಲಿ ಈಡೇರಿಸು.

ಶಂಕರಾತ್ಮಜ ದೈತ್ಯರಿಗತಿಭಯಂಕರಗತಿಗಳನು ಈಯಲೋಸುಗ
ಸಂಕಟಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು
ಮಂಕುಗಳ ಮೋಹಿಸುವೆ ಚಕ್ರಗದಾಂಕಿತನ ತೋರನುದಿನದಿ ತ್ವತ್ಪದ
ಪಂಕಜಗಳಿಗೆ ಬಿನ್ನಯಿಸುವೆನು ಪಾಲಿಪುದು ಎಮ್ಮ ॥ ೯ ॥

ಶಂಕರನ ಪುತ್ರನೇ, ದೈತ್ಯರಿಗೆ ಅತ್ಯಂತ ಭಯಂಕರವಾದ ಗತಿಗಳನ್ನು ನೀಡಲೋಸ್ಕರ ಸಂಕಷ್ಟ ಚತುರ್ಥಿಯಲ್ಲಿ ಇರುವವನಾಗಿ ಆ ಮಂಕುಗಳನ್ನು ಹಿತವಲ್ಲದ ಅಭೀಷ್ಟಗಳನ್ನು ನೀಡಿ ಮೋಹಪಡಿಸುವೆ. ಶಂಖಚಕ್ರಗಳಿಂದ ಲಾಂಛಿತನಾದವನೇ, ದಿನದಿನಗಳಲ್ಲಿ ನಿನ್ನ ಪಾದಕಮಲಗಳಿಗೆ ಬಿನ್ನೈಸುವೆನು. ನಮ್ಮನ್ನು ರಕ್ಷಿಸಬೇಕು.

ಸಿದ್ಧವಿದ್ಯಾಧರಗಣಸಮಾರಾಧ್ಯಚರಣಸರೋಜ ಸರ್ವಸು
ಸಿದ್ಧಿದಾಯಕ ಶೀಘ್ರದಿಂ ಪಾಲಿಪುದು ಬಿನ್ನಪವ
ಬುದ್ಧಿವಿದ್ಯಾಜ್ಞಾನಬಲ ಪರಿಶುದ್ಧಭಕ್ತಿವಿರಕ್ತಿ ನಿರುತನ
ವದ್ಯನ ಸ್ಮೃತಿಲೀಲೆಗಳ ಸುಸ್ತವನ ವದನದಲಿ ॥ ೧೦ ॥

ಸಿದ್ಧ, ವಿದ್ಯಾಧರ ಮೋದಲಾದವರ ಗುಂಪುಗಳಿಂದ ಚೆನ್ನಾಗಿ ಆರಾಧಿತವಾದ ಪಾದಕಮಲಗಳುಳ್ಳವನೇ, ಸರ್ವವಿಧ ಉತ್ತಮ ಸಿದ್ಧಿಗಳನ್ನು ನೀಡುವವನೇ, ಶೀಘ್ರದಿಂದ ಪಾಲಿಸು. ಬಿನ್ನೈಸುವೆನು. ಬುದ್ಧಿ, ವಿದ್ಯಾ, ಜ್ಞಾನ, ಬಲ, ಪರಿಶುದ್ಧಭಕ್ತಿ, ವಿರಕ್ತಿಗಳನ್ನೂ, ಸದಾ ನಿರ್ದೋಷನಾದ ಶ್ರೀಹರಿಯ ಸ್ಮೃತಿಯನ್ನು, ವದನದಲ್ಲಿ ಅವನ ಲೀಲೆಗಳ ಉತ್ತಮ ಸ್ತೋತ್ರವನ್ನು ನೀಡಬೇಕು.

ರಕ್ತವಾಸದ್ವಯವಿಭೂಷಣ ಉಕ್ತಿಲಾಲಿಸು ಪರಮಭಗವ-
ದ್ಭಕ್ತವರ ಭವ್ಯಾತ್ಮ ಭಾಗವತಾದಿಶಾಸ್ತ್ರದಲಿ
ಸಕ್ತವಾಗಲಿ ಮನವು ವಿಷಯ ವಿರಕ್ತಿ ಪಾಲಿಸು ವಿದ್ವದಾರ್ಯ ವಿ-
ಮುಕ್ತನೆಂದೆನಿಸೆನ್ನ ಭವಭಯದಿಂದಲನುದಿನ ॥ ೧೧ ॥

ಎರಡು ಕೆಂಪು ವಸ್ತ್ರಗಳಿಂದ ವಿಶೇಷವಾಗಿ ಅಲಂಕೃತನಾದವನೇ, ನನ್ನ ಮಾತನ್ನು ಲಾಲಿಸು. ಭವ್ಯಸ್ವರೂಪನೇ, ಪರಮಭಗದ್ಭಕರಲ್ಲಿ ಶ್ರೇಷ್ಠನಾದವನೇ, ನನ್ನ ಮನಸ್ಸು ಭಗವಾತಾದಿ ಶಾಸ್ತ್ರಗಳಲ್ಲಿ ಆಸಕ್ತವಾಗಲಿ. ವಿಷಯಗಳಲ್ಲಿ ವೈರಾಗ್ಯವನ್ನು ನೀಡು. ಜ್ಞಾನಿವರ್ಯನೇ ನನ್ನನ್ನು ಭವಭಯದಿಂದ ಪ್ರತಿದಿನದಲ್ಲೂ ವಿಮುಕ್ತನನ್ನಾಗಿ ಮಾಡು.

ಶುಕ್ರಶಿಷ್ಯರ ಸಂಹರಿಪುದಕೆ ಶಕ್ರನಿನ್ನನ್ನು ಪೂಜಿಸಿದನು ಉ–
ರುಕ್ರಮ ಶ್ರೀರಾಮಚಂದ್ರನು ಸೇತುಮುಖದಲ್ಲಿ
ಚಕ್ರವರ್ತಿಪ ಧರ್ಮರಾಜನು ಚಕ್ರಪಾಣಿಯ ನುಡಿಗೆ ಭಜಿಸಿದ
ವಕ್ರತುಂಡನೆ ನಿನ್ನೊಳೆಂತುಂಟೋ ಈಶಾನುಗ್ರಹವು ॥ ೧೨ ॥

ಶುಕ್ರಾಚಾರ್ಯರ ಶಿಷ್ಯರಾದ ದೈತ್ಯರನ್ನು ಸಂಹರಿಸಲೆಂದು ಇಂದ್ರನು ನಿನ್ನನ್ನು ಪೂಜಿಸಿದನು. ಸಾಕ್ಷಾತ್ ಶ್ರೀಹರಿಯಾದ ಶ್ರೀರಾಮಚಂದ್ರನು ಸೇತುಮುಖದಲ್ಲಿ ಪೂಜಿಸಿದನು. ಚಕ್ರವರ್ತಿಗಳ ಒಡೆಯನಾದ ಧರ್ಮರಾಜನು ಚಕ್ರಪಾಣಿಯಾದ ಶ್ರೀಕೃಷ್ಣನ ಮಾತಿನಂತೆ ನಿನ್ನನ್ನು ಆರಾಧಿಸಿದನು. ವಕ್ರತುಂಡನೇ ನಿನ್ನಲ್ಲಿ ಶ್ರೀಹರಿಯ ಅನುಗ್ರಹವು ಎಷ್ಟಿರುವುದೋ!

ಕೌರವೇಂದ್ರನು ನಿನ್ನ ಭಜಿಸದ ಕಾರಣದಿ ನಿಜಕುಲಸಹಿತ ಸಂ–
ಹಾರವೈದಿದ ಗುರುವರವೃಕೋದರನ ಗದೆಯಿಂದ
ತಾರಕಾಂತಕನನುಜ ಎನ್ನ ಶರೀರದೊಳು ನೀನಿಂತು ಧರ್ಮ
ಪ್ರೇರಕ ನೀನಾಗಿ ಸಂತೈಸೆನ್ನ ಕರುಣದಲಿ ॥ ೧೩ ॥

ಕೌರವಮುಖ್ಯನಾದ ದುರ್ಯೋಧನನು ನಿನ್ನನ್ನು ಆರಾಧಿಸದ ಕಾರಣ ಗುರುವರ್ಯನೂ, ವೃಕೋದರನೂ ಆದ ಶ್ರೀಭೀಮಸೇನದೇವರ ಗದೆಯಿಂದ ತನ್ನ ವಂಶ ಸಮೇತವಾಗಿ ಸಂಹಾರ ಹೊಂದಿದನು. ತಾರಕಾಸುರನನ್ನು ಕೊಂದ ಷಣ್ಮುಕನನುಜನೇ ನನ್ನ ಶರೀರದಲ್ಲಿ ನೀನು ನಿಂತು ಧರ್ಮಪ್ರೇರಕನು ನೀನೇ ಆಗಿದ್ದು ಕರುಣೆಯಿಂದ ನನ್ನನ್ನು ಪಾಲಿಸು.

ಏಕವಿಂಶತಿ ಮೋದಕ ಪ್ರಿಯ ಮೂಕರನು ವಾಗ್ಮಿಗಳ ಮಾಳ್ಪೆ ಕೃ-
ಪಾಕರೇಶ ಕೃತಜ್ಞ ಕಾಮದ ಕಾಯೋ ಕೈಪಿಡಿದು
ಲೇಖಕಾಗ್ರಣಿ ಮನ್ಮನದ ದುರ್ವ್ಯಾಕುಲವ ಪರಿಹರಿಸು ದಯದಿ ಪಿ-
ನಾಕಿಭಾರ್ಯತನುಜ ಮೃದ್ಭವ ಪ್ರರ್ಥಿಸುವೆ ನಿನಗೆ ॥ ೧೪ ॥

ಏಕವಿಂಶತಿ ಮೋದಕಪ್ರಿಯನೇ, ಮೂಕರನ್ನು ವಾಗ್ಮಿಗಳನ್ನಾಗಿ ಮಾಡುವ ಕರುಣಾಳುಗಳ ಒಡೆಯನೇ, ಮಾಡಿದ್ದನ್ನು ಅರಿಯುವವನೇ, ಅಭೀಷ್ಟವನ್ನು ನೀಡುವವನೇ, ನಮ್ಮನ್ನು ಕೈಹಿಡಿದು ಕಾಪಾಡು. ಲೇಖಕರಲ್ಲಿ ಅಗ್ರೇಸರನೇ, ನನ್ನ ಮನಸ್ಸಿನ ಕೆಟ್ಟ ವ್ಯಾಕುಲವನ್ನು ದಯವಿಟ್ಟು ಪರಿಹರಿಸು. ಶಿವನ ಪತ್ನಿಯಾದ ಪಾರ್ವತಿಯ ಪುತ್ರನೇ, ಮಣ್ಣಿನಿಂದ ಜನಿಸಿದವನೇ ನಿನ್ನನ್ನು ಪಾರ್ಥಿಸುವೆನು.

ನಿತ್ಯಮಂಗಲಚರಿತ ಜಗದುತ್ಪತ್ತಿಸ್ಥಿತಿಲಯ ನಿಯಮನಜ್ಞಾ-
ನತ್ರಯಪ್ರದ ಬಂಧಮೋಚಕ ಸುಮನಸಾಸುರರ
ಚಿತ್ತವೃತ್ತಿಗಳಂತೆ ನಡೆವ ಪ್ರಮತ್ತನಲ್ಲ ಸುಹೃಜ್ಜನಾಪ್ತನ
ನಿತ್ಯದಲಿ ನೆನೆನೆನೆದು ಸುಖಿಸುವ ಭಾಗ್ಯ ಕರುಣಿಪುದು ॥ ೧೫ ॥

ನಿತ್ಯ ಮಂಗಲಚರಿತ್ರನೇ, ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ನಿಯಮನಗಳನ್ನು, ಜ್ಞಾನ, ಅಜ್ಞಾನ, ಬಂಧ ಎಂಬ ಮೂರನ್ನು, ಬಂಧದಿಂದ ಮೋಚನೆಯನ್ನು ನೀಡುವಂತಹ ಶ್ರೀಹರಿಯಲ್ಲಿ ಸದಾ ಮನಸ್ಸನ್ನು ಇಟ್ಟಿರುವವನೇ, ಅಸುರರ ಚಿತ್ತವೃತ್ತಿಗಳಂತೆ ನಡೆಯುವ ಪ್ರಮತ್ತನು ನೀನಲ್ಲ. ಸುಹೃಜ್ಜನರಿಗೆ ಆಪ್ತನಾದಂತಹ ಶ್ರೀಹರಿಯನ್ನು ನಿತ್ಯದಲ್ಲಿ ನೆನೆನೆನೆದು ಆನಂದಿಸುವ ಭಾಗ್ಯವನ್ನು ಕರುಣಿಸಬೇಕು.

ಪಂಚಭೇದಜ್ಞಾನವರುಪು ವಿರಂಚಿ ಜನಕನ ತೋರು ಮನದಲಿ
ವಾಂಛಿತಪ್ರದ ಒಲಿಮೆಯಿಂದಲಿ ದಾಸನೆಂದರಿದು
ಪಂಚವಕ್ತ್ರನತನಯ ಭವದೊಳು ವಂಚಿಸದೆ ಸಂತೈಸು ವಿಷಯದಿ
ಸಂಚರಿಸದಂದದಲಿ ಮಾಡು ಮನಾದಿ ಕರಣಗಳ ॥ ೧೬ ॥

ಪಂಚಮುಖನಾದ ಶಿವನ ಪುತ್ರನೇ, ನೀನು ಪಂಚಭೇದಜ್ಞಾನವನ್ನು ತಿಳಿಸು. ಮನಸ್ಸಿನಲ್ಲಿ ಬ್ರಹ್ಮನಿಗೆ ತಂದೆಯಾದ ವಿಷ್ಣುವನ್ನು ತೋರಿಸು. ವಾಂಛಿತ ನೀಡುವವನೇ, ನಿನ್ನ ದಾಸನೆಂದು ತಿಳಿದು ಒಲಿಮೆಯಿಂದ ನನ್ನನ್ನು ಸಂಸಾರದಲ್ಲಿ ಮೋಹಗೊಳ್ಳುವಂತೆ ಮಾಡದೇ ಸಂತೈಸು. ಮನಸ್ಸು ಮೊದಲಾದ ಇಂದ್ರಿಯಗಳನ್ನು ವಿಷಯದಲ್ಲಿ ಸಂಚರಿಸದಂತೆ ಮಾಡು.

ಏನು ಬೇಡುವುದಿಲ್ಲ ನಿನ್ನ ಕುಯೋನಿಗಳು ಬರಲಂಜೆ ಲಕುಮೀ
ಪ್ರಾಣಪತಿ ತತ್ತ್ವೇಶರಿಂದೊಡಗೂಡಿ ಗುಣಕಾರ್ಯ
ತಾನೆ ಮಾಡುವನೆಂಬ ಈ ಸುಜ್ಞಾನವನೆ ಕರುಣಿಸುವುದೆಮಗೆ ಮ-
ಹಾನುಭಾವ ಮುಹುರ್ಮುಹುಃ ಪ್ರಾರ್ಥಿಸುವೆನಿನಿತೆಂದು ॥ ೧೭ ॥

ನಿನ್ನನ್ನು ಬೇರೇ ಏನನ್ನೂ ಬೇಡುವುದಿಲ್ಲ. ಕೆಟ್ಟ ಯೋನಿಗಳು ಬಂದರೂ ಅಂಜೆನು. ಲಕ್ಷ್ಮೀಪತಿ ಮತ್ತು ಪ್ರಾಣಪತಿಯಾದ ಶ್ರೀಹರಿಯು ತತ್ತ್ವಾಭಿಮಾನಿದೇವತೆಗಳೊಂದಿಗೆ ಕೂಡಿ ಸತ್ತ್ವಾದಿಗುಣಗಳ ಕಾರ್ಯವಾದ ಪುಣ್ಯಪಾಪಗಳನ್ನು ತಾನೇ ಮಾಡುವನು ಎಂಬ ಈ ಸುಜ್ಞಾನವನ್ನೇ ನಮಗೆ ಕರುಣಿಸಬೇಕು. ಮಹಾಪ್ರಭಾವನೇ ಹೀಗೆಂದು ನಿನ್ನನ್ನು ಮತ್ತೆ ಮತ್ತೆ ಪ್ರಾರ್ಥಿಸುವೆನು.

ನಮೋ ನಮೋ ಗುರುವರ್ಯ ವಿಬುಧೋತ್ತಮ ವಿವರ್ಜಿತ ನಿದ್ರ ಕಲ್ಪ-
ದ್ರುಮನೆನಿಪ ಭಜಕರಿಗೆ ಬಹುಗುಣಭರಿತ ಶುಭಚರಿತ
ಉಮೆಯನಂದನ ಪರಿಹರಿಸಹಂ ಮಮತೆ ಬುದ್ಧ್ಯಾದಿಂದ್ರಿಯಗಳಾ-
ಕ್ರಮಿಸಿ ದಣಿಸುತಲಿಹವು ಭವದೊಳಗಾವಕಾಲದಲಿ ॥ ೧೮ ॥

ಗುರುವರ್ಯನೇ, ದೇವೋತ್ತಮನೇ, ನಿದ್ರೆಯನ್ನು ಗೆದ್ದವನೇ, ನಿನಗೆ ನಮಸ್ಕಾರ ನಮಸ್ಕಾರ. ನೀನು ಭಜಿಸಿದವರಿಗೆ ಕಲ್ಪವೃಕ್ಷನೆನ್ನಿಸುವೆ. ನೀನು ಬಹುಗುಣಗಳಿಂದ ಕೂಡಿದವನು. ಮಂಗಳಚರಿತ್ರನಾದ ಉಮೆಯ ಪುತ್ರನೇ, ನನ್ನಲ್ಲಿ ಅಹಂಕಾರ, ಮಮಕಾರಗಳನ್ನು ಪರಿಹರಿಸು. ಸಂಸಾರದೊಳಗೆ ಬುದ್ಧಿ ಮೊದಲಾದ ಇಂದ್ರಿಯಗಳು ನನ್ನನ್ನು ಆಕ್ರಮಿಸಿ ಎಲ್ಲಾ ಕಾಲದಲ್ಲೂ ದಣಿಸುತ್ತಲಿರುವವು.

ಜಯ ಜಯತು ವಿಘ್ನೇಶ ತಾಪತ್ರಯ ವಿನಾಶನ ವಿಶ್ವಮಂಗಳ
ಜಯ ಜಯತು ವಿದ್ಯಾಪ್ರದಾಯಕ ವೀತಭಯಶೋಕ
ಜಯ ಜಯತು ಚಾರ್ವಾಂಗ ಕರುಣಾನಯನದಿಂದಲಿ ನೋಡಿ ಜನ್ಮ-

ಮಯ ಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ ॥ ೧೯ ॥

ವಿಘ್ನೇಶ ಜಯ ಜಯತು. ತಾಪತ್ರಯಗಳನ್ನು ಪರಿಹರಿಸುವವನು. ಜಗತ್ತಿಗೆ ಮಂಗಳ ನೀಡುವವನೇ, ಜಯ ಜಯತು ವಿದ್ಯಾಪ್ರದಾಯಕನೇ, ಭಯಶೋಕಗಳನ್ನು ನೀಗಿದವನೇ, ಜಯ ಜಯತು ಮನೋಹರವಾದ ಅಂಗಗಳುಳ್ಳವನೇ, ನೀನು ಕರುಣಾ ದೃಷ್ಟಿಯಿಂದ ನೋಡಿ ಸಂಸಾರದೊಳಗೆ ಭಕ್ತರಿಗೆ ಜನ್ಮ, ರೋಗ ಮತ್ತು ಮರಣಗಳನ್ನು ಪರಿಹರಿಸು.

ಕಡುಕರುಣಿ ನೀನೆಂದರಿದು ಹೇರೊಡಲ ನಮಿಸುವೆ ನಿನ್ನಡಿಗೆ ಬೆಂ-
ಬಿಡದೆ ಪಾಲಿಸು ಪರಮ ಕರುಣಾಸಿಂಧು ಎಂದೆಂದು
ನಡುನಡುವೆ ಬರುತಿಪ್ಪ ವಿಘ್ನವ ತಡೆದು ಭಗವನ್ನಾಮ ಕೀರ್ತನೆ
ನುಡಿದು ನುಡಿಸೆನ್ನಿಂದ ಪ್ರತಿದಿವಸದಲಿ ಮರೆಯದಲೆ ॥ ೨೦ ॥

ನೀನು ತುಂಬಾ ಕರುಣಾಳು ಎಂದು ತಿಳಿದು ಎಲೈ ಅಂಬೋದರನೇ ನಿನ್ನ ಪಾದಕ್ಕೆ ವಂದಿಸುವೆನು. ನನ್ನ ಬೆನ್ನು ಬಿಡದೇ ಎಂದೆಂದೂ ಪಾಲಿಸು. ಪರಮ ಕರುಣಾ ಸಮುದ್ರನೇ ಮಧ್ಯೇ ಮಧ್ಯೇ ಬರುತ್ತಿರುವ ವಿಘ್ನಗಳನ್ನು ಪರಿಹರಿಸಿ ಭಗವಂತನಾದ ಶ್ರೀಹರಿಯ ನಾಮ ಸಂಕೀರ್ತನೆಯನ್ನು ನುಡಿದು ಪ್ರತಿದಿವಸದಲ್ಲಿ ಮರೆಯದಲೆ ನನ್ನಿಂದ ನುಡಿಸು.

ಏಕವಿಂಶತಿ ಪದಗಳೆನಿಸುವ ಕೋಕನದ ನವಮಾಲಿಕೆಯ ಮೈ-
ನಾಕಿತನಯಾಂತರ್ಗತ ಶ್ರೀಪ್ರಾಣಪತಿಯೆನಿಪ
ಶ್ರೀಕರ ಜಗನ್ನಾಥವಿಠ್ಠಲ ಸ್ವೀಕರಿಸಿ ಸ್ವರ್ಗಾಪವರ್ಗದಿ
ತಾ ಕೊಡುವ ಸೌಖ್ಯಗಳ ಭಕ್ತರಿಗಾವಕಾಲದಲಿ ॥ ೨೧ ॥

ಇಪ್ಪತ್ತೊಂದು ಪದಗಳೆನಿಸುವ ಕೆಂದಾವರೆಯ ಈ ನವಮಾಲಿಕೆಯನ್ನು ಪಾರ್ವತೀ ಪುತ್ರನಾದ ಗಣೇಶನ ಅಂತರ್ಯಾಮಿಯಾದ ಲಕ್ಷ್ಮೀಪ್ರಾಣಪತಿಯಾದ ಶ್ರೀಕರನಾದ ಜಗನ್ನಾಥವಿಠ್ಠಲನು ಸ್ವೀಕರಿಸಿ ಸ್ವರ್ಗ ಮತ್ತು ಅಪವರ್ಗಗಳಲ್ಲಿ ಭಕ್ತರಿಗೆ ಎಲ್ಲಾ ಕಾಲದಲ್ಲೂ ಸೌಖ್ಯಗಳನ್ನು ತಾನು ನೀಡುವನು.

---- ಮುಂದುವರೆಯಲಿದೆ ---→